# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 316 |
| ಸದಸ್ಯರ ಹೆಸರು | : | ಶ್ರೀ ಎಸ್. ರುದ್ರೇಗೌಡ, (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 15-12-2021. |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ಕರ್ನಾಟಕ/ ಕಲ್ಯಾಣ ಕರ್ನಾಟಕ ಹಾಗೂ ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳ ಕರಾವಳಿ ಮತ್ತು ಮಧ್ಯ ಕರ್ನಾಟಕದ ಸಂಪರ್ಕಕ್ಕೆ ಹರಿಹರ, ಹೊನ್ನಾಳಿ ಮತ್ತು ಶಿವಮೊಗ್ಗ ದಾರಿಯು ಸೂಕ್ತವಾಗಿದ್ದು, ಈ ದಾರಿಯಲ್ಲಿ ಅತೀ ಹೆಚ್ಚು ಸರ್ಕಾರಿ ಮತ್ತು ಖಾಸಗಿ ವಾಹನಗಳು ಓಡಾಡುವುದಕ್ಕೆ ಅನುಕೂಲವಾಗಿರುವುದರಿಂದ ಇದನ್ನು ರಾಷ್ಟ್ರೀಯ ಹೆದ್ದಾರಿಯನ್ನಾಗಿ ಪರಿವರ್ತಿಸಲು ಸರ್ಕಾರದ ಚಿಂತನೆ ಇದೆಯೇ; | ಭಾರತ ಸರ್ಕಾರದ ಕೇಂದ್ರ ಭೂಸಾರಿಗೆ ಹಾಗೂ ಹೆದ್ದಾರಿ ಮಂತ್ರಾಲಯದ ಪತ್ರದ ಸಂ:NH-14012-8-2013-P&M Dtd: 07.03.2016 ರಂತೆ ರಾಹೆ-4 ಶಿವಮೊಗ್ಗ-ಹೊನ್ನಾಳಿ-ಮಲೆಬೆನ್ನೂರು-ಹರಿಹರವರೆಗಿನ ರಸ್ತೆಯನ್ನು (ಸುಮಾರು 83.80 ಕಿ.ಮೀ) ರಾಷ್ಟ್ರೀಯ ಹೆದ್ದಾರಿಯನ್ನಾಗಿ ಘೋಷಣೆ ಮಾಡಲು ತಾತ್ವಿಕವಾಗಿ ಅನುಮೋದನೆ ನೀಡಲಾಗಿರುತ್ತದೆ. ಹಾಗೂ ಸದರಿ ರಾಜ್ಯ ಹೆದ್ದಾರಿಯನ್ನು ರಾಷ್ಟ್ರೀಯ ಹೆದ್ದಾರಿಯನ್ನಾಗಿ ಅಭಿವೃದ್ಧಿಪಡಿಸುವ ಸಲುವಾಗಿ ಕಾರ್ಯಸಾಧ್ಯತಾ ಸಮೀಕ್ಷೆ ಹಾಗೂ ವಿವರವಾದ ಯೋಜನಾ ವರದಿಯನ್ನು ತಯಾರಿಸುವ ಸಲುವಾಗಿ ಗುತ್ತಿಗೆ ಪ್ರಕ್ರಿಯೆ ಮೂಲಕ M/s. Infra Support Engineering Consultants Pvt., ಇವರಿಗೆ 2017-18 ನೇ ಸಾಲಿನಲ್ಲಿ ರೂ.290.14 ಲಕ್ಷಗಳಿಗೆ ಗುತ್ತಿಗೆ ನೀಡಲಾಗಿರುತ್ತದೆ.<br><br>ಅದರಂತೆ, ಸಮಾಲೋಚಕರು ಸಲ್ಲಿಸಿದ ಕಾರ್ಯಸಾಧ್ಯತೆಯ ವರದಿಯನ್ನು ಕೇಂದ್ರ ಭೂಸಾರಿಗೆ ಹಾಗೂ ಹೆದ್ದಾರಿ ಮಂತ್ರಾಲಯಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗಿರುತ್ತದೆ. |
| ಆ) | ಇದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು ? | ಆದರೆ ಕೇಂದ್ರ ಸರ್ಕಾರದ ನೀತಿಯಂತೆ ಕೇಂದ್ರ ಭೂಸಾರಿಗೆ ಹಾಗೂ ಹೆದ್ದಾರಿ ಮಂತ್ರಾಲಯದ ಪತ್ರ ಸಂ.RW/NH-33044/24/2020/S&R (P&B)/ ದಿನಾಂಕ:28.07.2020 ರಲ್ಲಿ ತಾತ್ವಿಕವಾಗಿ ಅನುಮೋದಿತವಾಗಿರುವ ಪ್ರಸ್ತಾವನೆಗಳನ್ನು ಇದ್ದ ಸ್ಥಿತಿಯಲ್ಲಿಯೇ ಪೂರ್ವ ಮುಕ್ತಾಯಗೊಳಿಸಲು ಸೂಚಿಸಲಾಗಿದ್ದು, ಅದರಂತೆ ಕ್ರಮ ಕೈಗೊಳ್ಳಲಾಗಿರುತ್ತದೆ. |

ಕಡತ ಸಂಖ್ಯೆ: ಲೋಇ 319 ಸಿಎನ್‌ಹೆಚ್ 2021 (ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು